## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 835 (829)

ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 20-09-2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಮತ್ತು ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಕಾಡು ಪ್ರಾಣಿಗಳ ದಾಳಿಯಿಂದ ಬೆಳೆಹಾನಿ ಹಾಗೂ ಜನ-ಜಾನುವಾರುಗಳ ಜೀವಹಾನಿ ಆಗಿರುವುದಕ್ಕೆ ಯಾವ ಪರಿಹಾರವನ್ನು ನೀಡಲಾಗಿದೆ. | ರಾಮನಗರ ಮತ್ತು ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ವನ್ಯ ಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ ಪ್ರಾಣಹಾನಿ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ ಎಫ್ಇಇ 143 ಎಫ್‌ಡಬ್ಲೂಎಲ್ 2010 ದಿನಾಂಕ 03.08.2011 ರನ್ವಯ ವನ್ಯಪ್ರಾಣಿಗಳ ದಾಳಿಯಿಂದ ಮೃತರಾದ ವ್ಯಕ್ತಿಯ ವಾರಸುದಾರರಿಗೆ ಪಾವತಿಸಲಾಗುತ್ತಿದ್ದ ರೂ.5,00,000/- ಧಯಾತ್ಮಕ ಧನವನ್ನು ಸರ್ಕಾರದ ಆದೇಶ ಸಂಖ್ಯೆ ಅಪಜೀ 66 ಎಫ್‌ಡಬ್ಲ್ಯೂಎಲ್ 2019 ದಿನಾಂಕ 07.01.2020ರಲ್ಲಿ ರೂ. 7,50,000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.<br><br>ಅಲ್ಲದೇ, ಸರ್ಕಾರಿ ಆದೇಶ ಸಂಖ್ಯೆ:ಅಪಜೀ 61 ಎಫ್‌ಎಪಿ 2018 ದಿನಾಂಕ 16.10.2018 ರಂತೆ ಮೃತರ ಕುಟುಂಬದ ವಾರಸುದಾರರಿಗೆ ಹಾಗೂ ಶಾಶ್ವತ ಅಂಗವಿಕಲತೆ ಪ್ರಕರಣಗಳಲ್ಲಿ ಸಂತ್ರಸ್ಥರಿಗೆ 05 ವರ್ಷಗಳವರೆಗೆ ಪ್ರತಿ ತಿಂಗಳಿಗೆ ರೂ. 2,000/-ಗಳ ಮಾಸಾಶನವನ್ನು ಸಹ ನೀಡಲಾಗುತ್ತಿದೆ.<br><br>ಸರ್ಕಾರಿ ಆದೇಶ ಸಂಖ್ಯೆ:ಅಪಜೀ 130 ಎಫ್‌ಡಬ್ಲ್ಯು ಎಲ್ 2016, ದಿನಾಂಕ 19.09.2016ರಂತೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆಹಾನಿ ಪ್ರಕರಣಗಳಲ್ಲಿ ನಿಗದಿಪಡಿಸಲಾದ ಎಕ್ಸ್ ಗ್ರೇಷಿಯಾ ಮೊತ್ತವನ್ನು *ಇ-ಪರಿಹಾರ* ತಂತ್ರಾಂಶದ ಮೂಲಕ ಪರಿಶೀಲಿಸಿ ಪಾವತಿಸಲಾಗುತ್ತಿದೆ. |

......2

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ವನ್ಯ ಪ್ರಾಣಿಗಳ ದಾಳಿಯಿಂದ ಉಂಟಾಗುವ ಸಾಕು ಪ್ರಾಣಿಹತ್ಯೆ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 109 ಎಫ್ಎಪಿ 2014, ದಿನಾಂಕ 13.08.2014 ರನ್ವಯ ಕುರಿ, ಮೇಕೆ ಮೃತಪಟ್ಟಲ್ಲಿ ರೂ.5,000/-ಗಳ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.<br><br>ವನ್ಯಪ್ರಾಣಿ ದಾಳಿಯಿಂದ ಹಸು, ಎತ್ತು, ಎಮ್ಮೆ ಮತ್ತು ಕೋಣ ಮೃತಪಟ್ಟಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 144 ಎಫ್ ಎಪಿ 2020, ದಿನಾಂಕ: 20.04.2021 ರನ್ವಯ ಎಸ್.ಡಿ.ಆರ್.ಎಫ್ (State disaster Response Fund) ರಲ್ಲಿನ ದರಗಳಂತೆ 2021-22 ನೇ ಸಾಲಿನಿಂದ ಜಾರಿಗೆ ಬರುವಂತೆ ರೂ.30,000/- ಗಳ ಗರಿಷ್ಠ ಮೊತ್ತದ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.<br><br>ಕಳೆದ 02 ವರ್ಷಗಳಲ್ಲಿ ರಾಮನಗರ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಜಿಲ್ಲಾ ವ್ಯಾಪ್ತಿಯಲ್ಲಿ ವನ್ಯಪ್ರಾಣಿ ಹಾವಳಿಯಿಂದ ಉಂಟಾದ ಬೆಳೆಹಾನಿ, ಸಾಕು ಪ್ರಾಣಿಹತ್ಯೆ, ಮಾನವ-ಪ್ರಾಣ ಹಾನಿ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ಈ ಕಾಡು ಪ್ರಾಣಿಗಳು ರೈತರ ಜಮೀನಿಗೆ ಬರದಂತೆ ತಡೆಯಲು ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ? (ಇವುಗಳ ನಿಯಂತ್ರಣದ ರೂಪು-ರೇಷಗಳು ಯಾವುವು ಮಾಹಿತಿ ನೀಡುವುದು) | ವನ್ಯಪ್ರಾಣಿಗಳು ನಗರ / ಪಟ್ಟಣದ ವಸತಿ ಪ್ರದೇಶಗಳಿಗೆ ಬರುವುದನ್ನು ತಡೆಯಲು ಇಲಾಖಾವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಹುಲಿ ಮೀಸಲು ಅರಣ್ಯ, ಸಂರಕ್ಷಿತ ಮೀಸಲು ಅರಣ್ಯಗಳನ್ನು ಘೋಷಿಸಲಾಗಿರುತ್ತದೆ.<br>2. ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಿಂದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತ ಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ. |

.....3

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 3. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br>4. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ /ನಿರ್ವಹಣೆ, ಆನೆ ತಡೆಕಂದಕ ನಿರ್ಮಾಣ/ ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>5. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT) ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯಕೈಗೊಳ್ಳಲಾಗುತ್ತಿದೆ ಹಾಗೂ Wireless Networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>6. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯ ನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>7. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನ-ವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ.<br>8. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 9. ಚಿರತೆ: ರಾಜ್ಯದಲ್ಲಿ ಚಿರತೆ ಹಾವಳಿ ತಡೆಗಟ್ಟಲು ಎಲ್ಲಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವ ಕಡೆ ರಾತ್ರಿ ಗಸ್ತು ಮಾಡಲು ಮತ್ತು ಚಿರತೆ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರೆ ಉಪಕರಣಗಳನ್ನು ಸಿದ್ಧತೆ ಮಾಡಿಕೊಂಡು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿಗಳೊಂದಿಗೆ ಭೇಟಿ ನೀಡಿ ಸಾರ್ವಜನಿಕರಿಗೆ ತಿಳುವಳಿಕೆ ನೀಡುವುದಲ್ಲದೇ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡುವಂತೆ ರಾಜ್ಯದ ಎಲ್ಲಾ ಅರಣ್ಯ ಸಂರಕ್ಷಣಾಧಿಕರಿಗಳಿಗೆ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ.<br>10. ಹುಲಿ: ರಾಜ್ಯದಲ್ಲಿ ಹುಲಿ ಹಾವಳಿ ಕಂಡು ಬಂದಂತಹ ಸಂದರ್ಭದಲ್ಲಿ ಹಾವಳಿ ತಡೆಗಟ್ಟಲು ಅರಣ್ಯಾಧಿಕಾರಿಗಳಿಗೆ ಮುಂಜಾಗ್ರತಾ ಕ್ರಮವಾಗಿ ತಮ್ಮ ತಮ್ಮ ವಿಭಾಗಗಳಲ್ಲಿ 3-4 ಜನರನ್ನೊಳಗೊಂಡ ರಕ್ಷಣಾ ಪಡೆಯನ್ನು ರಚಿಸಿ ಹಾವಳಿ ಪ್ರದೇಶಗಳನ್ನು ಗುರುತಿಸಿ ಜನ ಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವ ಕಡೆ ಹಗಲು-ರಾತ್ರಿ ಗಸ್ತು ಮಾಡಲು ಮತ್ತು ಹುಲಿ ಹಿಡಿಯಲು ಬೇಕಾದ ಬೋನು, Tranquilizer Gun ಮತ್ತಿತರೆ ಉಪಕರಣಗಳನ್ನು ಸಿದ್ಧತೆ ಮಾಡಿಕೊಂಡು ಸಂಬಂಧಪಟ್ಟ ಅರಣ್ಯಾಧಿಕಾರಿಗಳು ಸ್ಥಳಕ್ಕೆ ಭೇಟಿ ನೀಡಿ ಸಾರ್ವಜನಿಕರಿಗೆ ಅರಿವು ನೀಡುವುದಲ್ಲದೇ, ಅದರಲ್ಲೂ ಕಾಡಂಚಿನಲ್ಲಿ ವಾಸಿಸುವ ಜನರಿಗೆ ಹೆಚ್ಚಿನ ತಿಳುವಳಿಕೆ ನೀಡಲಾಗುತ್ತಿದೆ. |

......5

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 11. ಕರಡಿ: ರಾಜ್ಯದಲ್ಲಿ ಕರಡಿ ಹಾವಳಿ ಕಂಡು ಬಂದಂತಹ ಸಂದರ್ಭದಲ್ಲಿ ಕಳ್ಳಬೇಟೆ ತಡೆ ಶಿಬಿರ / ಕ್ಷಿಪ್ರ ತಡೆ ಶಿಬಿರದ ಸಿಬ್ಬಂದಿಯ ಮೂಲಕ ಕರಡಿಯನ್ನು ಹಿಮ್ಮೆಟ್ಟಿಸುವ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಅಪಜೀ 182 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು

## ಅನುಬಂಧ – 1

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಪ್ರಶ್ನೆ ಸಂಖ್ಯೆ: 835 (829)

ರಾಮನಗರ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಜಿಲ್ಲೆಯಲ್ಲಿ ಕಳೆದ 2 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ, ಸಾಕುಪ್ರಾಣಿ ಹತ್ಯೆ ಮತ್ತು ಮಾನವ ಪ್ರಾಣ-ಹಾನಿಗಳು ಹಾಗೂ ಪಾವತಿಸಲಾಗಿರುವ ಪರಿಹಾರದ ವಿವರ

(ರೂ.ಗಳಲ್ಲಿ)

| ಕ್ರ.ಸಂ | ಜಿಲ್ಲೆ | ಬೆಳೆಹಾನಿ | | ಜಾನುವಾರ ಹತ್ಯೆ | | ಮಾನವ ಪ್ರಾಣ ಹಾನಿ | |
|---|---|---|---|---|---|---|---|
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | 2 | 3 | 4 | 5 | 6 | 7 | 8 |
| | | **2018–19** | | | | | |
| 1 | ಬೆಂಗಳೂರು | 259 | 1,140,773 | 56 | 602,000 | – | – |
| 2 | ರಾಮನಗರ | 2,071 | 9,997,946 | 781 | 5,536,196 | 3 | 1,197,089 |
| | | **2019–20** | | | | | |
| 1 | ಬೆಂಗಳೂರು | 129 | 910,943 | 51 | 494,000 | 1 | 500,000 |
| 2 | ರಾಮನಗರ | 2,056 | 7,829,105 | 354 | 2,451,164 | 3 | 800,000 |
| | | **2020–21** | | | | | |
| 1 | ಬೆಂಗಳೂರು | 137 | 815,246 | 109 | 2,442,000 | 2 | 1,250,000 |
| 2 | ರಾಮನಗರ | 2,849 | 12,070,501 | 501 | 3,474,700 | 3 | 2,250,000 |

## ಅನುಬಂಧ – 1

| ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಪ್ರಶ್ನೆ ಸಂಖ್ಯೆ: 835 (829) | | | | | | | |
|---|---|---|---|---|---|---|---|
| ರಾಮನಗರ ಮತ್ತು ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಜಿಲ್ಲೆಯಲ್ಲಿ ಕಳೆದ 2 ವರ್ಷಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ, ಸಾಕುಪ್ರಾಣಿ ಹತ್ಯೆ ಮತ್ತು ಮಾನವ ಪ್ರಾಣ-ಹಾನಿಗಳು ಹಾಗೂ ಪಾವತಿಸಲಾಗಿರುವ ಪರಿಹಾರದ ವಿವರ | | | | | | | |
| | | | | | | | (ರೂ.ಗಳಲ್ಲಿ) |
| ಕ್ರ.ಸಂ | ಜಿಲ್ಲೆ | ಬೆಳೆಹಾನಿ | | ಜಾನುವಾರ ಹತ್ಯೆ | | ಮಾನವ ಪ್ರಾಣ ಹಾನಿ | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | 2 | 3 | 4 | 5 | 6 | 7 | 8 |
| | | **2018–19** | | | | | |
| 1 | ಬೆಂಗಳೂರು | 259 | 1,140,773 | 56 | 602,000 | – | – |
| 2 | ರಾಮನಗರ | 2,071 | 9,997,946 | 781 | 5,536,196 | 3 | 1,197,089 |
| | | **2019–20** | | | | | |
| 1 | ಬೆಂಗಳೂರು | 129 | 910,943 | 51 | 494,000 | 1 | 500,000 |
| 2 | ರಾಮನಗರ | 2,056 | 7,829,105 | 354 | 2,451,164 | 3 | 800,000 |
| | | **2020–21** | | | | | |
| 1 | ಬೆಂಗಳೂರು | 137 | 815,246 | 109 | 2,442,000 | 2 | 1,250,000 |
| 2 | ರಾಮನಗರ | 2,849 | 12,070,501 | 501 | 3,474,700 | 3 | 2,250,000 |